# ನಾಲಗೆಯ ವಿಪತ್ತುಗಳು

ಅಲ್ಲಾಹನು ಕೊಟ್ಟಿರುವ ನಾಲಗೆಯನ್ನು ಉಪಯೋಗಿಸಿ ಉತ್ತಮವಾದ ಮಾತನ್ನು ಹೇಳಲು ಮತ್ತು ಕೆಟ್ಟ ಮಾತನ್ನು ಹೇಳಲು ಮಾನವನಿಗೆ ಸಾಧ್ಯವಿದೆ. ಆದರೆ ಅಲ್ಲಾಹನ ಮೇಲೆ ಮತ್ತು ಅಂತ್ಯ ದಿನದ ಮೇಲೆ ವಿಶ್ವಾವನ್ನಿಡುವವರು ಅದನ್ನು ಅಲ್ಲಾಹನ ಆಜ್ಞೆಯ ಪ್ರಕಾರವೇ ಉಪಯೋಗಿಸುವರು. ಅಲ್ಲಾಹನು ನಾಲಗೆಯನ್ನು ಎಲ್ಲಾ ರೀತಿಯಲ್ಲೂ ಬಳಕೆ ಮಾಡುವಂತೆ ರೂಪಿಸಿದ್ದಾನೆ. ಆದುದರಿಂದ ನಾಲಗೆಯಿಂದ ಏನನ್ನೂ ಹೇಳಲು ಸಾಧ್ಯವಿರುವ ಕಾರಣ ಅದನ್ನು ನಾವು ನಿಯಂತ್ರಿಸಲೇಬೇಕು. ಕೆಲವರ ಬಾಯಿಯಿಂದ ಬರುವ ಮಾತುಗಳಿಗೆ ಬೊಂಬ್‌ಗಿಂತಲೂ ಶಕ್ತಿಯಿರುತ್ತದೆ. ಎಷ್ಟೆಷ್ಟು ಕುಟುಂಬಗಳು ನಾಲಗೆಯ ಮೂಲಕ ವಿಚ್ಛೇದಿಸಲ್ಪಟ್ಟಿದೆ. ನಾಲಗೆಯ ಮೂಲಕ ಉಂಟಾಗುವ ಕೆಡುಕುಗಳಲ್ಲಿ ಅತ್ಯಂತ ಕಠಿಣವಾದುದು ಗೀಬತ್ ಮತ್ತು ನಮೀಮತ್ ಆಗಿದೆ. ಖುರ್‌ಅನ್ ಅದನ್ನು ಕಠಿಣವಾದ ಭಾಷೆಯಲ್ಲಿ ವಿರೋಧಿಸಿದೆ.

يَا أَيُّهَا الَّذِينَ آمَنُوا اجْتَنِبُوا كَثِيرًا مِنَ الظَّنِّ إِنَّ بَعْضَ الظَّنِّ إِثْمٌ وَلَا تَجَسَّسُوا وَلَا يَغْتَبْ بَعْضُكُمْ بَعْضًا أَيُحِبُّ أَحَدُكُمْ أَنْ يَأْكُلَ لَحْمَ أَخِيهِ مَيْتًا فَكَرِهْتُمُوهُ وَاتَّقُوا اللَّهَ إِنَّ اللَّهَ تَوَّابٌ رَحِيمٌ

“ಸತ್ಯವಿಶ್ವಾಸಿಗಳೇ, ಊಹನೆಗಳಲ್ಲಿ ಹೆಚ್ಚಿನವುಗಳನ್ನು ನೀವು ವರ್ಜಿಸಿರಿ. ಖಂಡಿತ ಊಹನೆಗಳಲ್ಲಿ ಕೆಲವು ಪಾಪವಾಗಿದೆ. ನೀವು ಗೂಢಾಚಾರ ಮಾಡಬೇಡಿರಿ. ನಿಮ್ಮಲ್ಲಿ ಕೆಲವರು ಕೆಲವರ ಕುರಿತು ಅವರ ಅನುಪಸ್ಥಿತಿಯಲ್ಲಿ ಕೆಟ್ಟ ಮಾತುಗಳನ್ನು ಹೇಳಬೇಡಿರಿ. ತನ್ನ ಸಹೋದರನು ಮರಣ ಗೊಂಡಾಗ ಆತನ ಮಾಂಸವನ್ನು ತಿನ್ನಲು ನಿಮ್ಮಲ್ಲಿ ಯಾರದರೂ ಇಷ್ಟಪಡುತ್ತೀರಾ ? ಆದರೆ ಅದು (ಶವವನ್ನು ತಿನ್ನುವುದು) ನಿಮಗೆ ಅಪ್ರಿಯವಾಗಿದೆ. ಅಲ್ಲಾಹನನ್ನು ನೀವು ಭಯಪಡಿರಿ. ಖಂಡಿತ ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನು ಮತ್ತು ಕರುಣಾ ನಿಧಿಯೂ ಆಗಿದ್ದಾನೆ.” (ಹುಜುರಾತ್ : 12)

ಮನುಷ್ಯರ ಕುಂದು ಕೊರತೆಗಳನ್ನು ಹೇಳಿ ನಡೆಯುವುದು ತನ್ನ ಸಹೋದರನು ಮರಣ ಗೊಂಡರೆ ಆತನ ಮಾಂಸ ತಿನ್ನುವುದಕ್ಕೆ ಸಮಾನವಾಗಿದೆಯೆಂದಾಗಿದೆ ಖುರ್‌ಆನ್ ಹೇಳಿರುವುದು. ಗೀಬತ್ ಹೇಳುವುದು ಎಷ್ಟೊಂದು ಅಪಾಯಕಾರಿಯಾಗಿದೆ. ಅದೇ ರೀತಿ ಮೂದಲಿಸುವವರಿಗೂ ಪರಲೋಕದಲ್ಲಿ ಕಠಿಣ ಶಿಕ್ಷೆಯಿದೆಯೆಂದು ಖುರ್‌ಆನ್ ಹೇಳುವುದನ್ನು ಗಮನಿಸಿರಿ:

وَيْلٌ لِكُلِّ هُمَزَةٍ لُمَزَةٍ

“ಮೂದಲಿಸುವ ಮತ್ತು ಅವಹೇಳನ ಮಾಡುವ ಪ್ರತಿಯೊಬ್ಬರಿಗೂ ನಾಶವಿದೆ.”(ಹುಮಝ :1)



ಜನರಿಗೆ ನಗುಂಟು ಮಾಡಲಿಕ್ಕಾಗಿ ಮತ್ತು ಪರಿಹಾಸ್ಯ ಮಾಡಲಿಕ್ಕಾಗಿ ಸಭೆಗಳಲ್ಲಿ ಮತ್ತು ಅಂಗಡಿ ಬಾಗಿಲುಗಳಲ್ಲಿ ಗೀಬತ್ ನಮೀಮತ್‌ಗಳನ್ನು ಹೇಳಿ ನಡೆಯುವ ಹಲವರನ್ನು ಕಾಣಬಹುದು. ಪ್ರತ್ಯೇಕವಾಗಿ ಸ್ತ್ರೀಯರು. ಅಂತಹವರು ಅದು ಇಹ ಮತ್ತು ಪರದಲ್ಲಿ ಕಠಿಣ ಶಿಕ್ಷೆಗೆ ಗುರಿಯಾಗಲು ಹೇತುವಾದೀತು ಎಂಬುವುದನ್ನು ಭಯಪಡಲಿ. ನಾಲಗೆ ಮೂಲಕ ಪ್ರಚಾರವಾಗುತ್ತಿರುವಂತೆ ಇಂದಿನ ವಾರ್ತಾ ಮಾಧ್ಯಮಗಳ ಮೂಲಕ ದಿನನಿತ್ಯ ನಾವು ಆಲಿಸುತ್ತಿರುವ, ವೀಕ್ಷಿಸುತ್ತಿರುವ, ಓದುತ್ತಿರುವ ವಾರ್ತೆಗಳು, ಲೇಖನಗಳು, ಮುಂದುವರಿಯುತ್ತಿರುವ ಲೇಖನಗಳೆಲ್ಲವೂ ವಿವಿಧ ರೀತಿಯ ಸುಳ್ಳುಗಳನ್ನೂ, ಪರನಿಂದನೆಗಳನ್ನೂ ಹಾಗೂ ವ್ಯಭಿಚಾರಾರೋಪಗಳನ್ನು ಪ್ರಚಾರ ಮಾಡುತ್ತಿದೆ. ಲಕ್ಷಗಟ್ಟಲೆ ಪ್ರತಿಗಳು ಪ್ರಕಟವಾಗುತ್ತಿರುವ ಪತ್ರಿಕೆಗಳನ್ನು ಲಕ್ಷಕ್ಕಿಂತಲೂ ಮಿಕ್ಕಿದ ಜನರು ಓದುತ್ತಿದ್ದಾರೆ. ಆದುದರಿಂದ ಅವುಗಳನ್ನು ಬರೆದು ಬಿಡುವವನಿಗೆ ಮತ್ತು ಪ್ರಚಾರಮಾಡುವವರಿಗೆ ಎಷ್ಟರ ಮಟ್ಟಿಗೆ ಪಾಪ ಉಂಟಾದೀತು ಎಂಬುವುದರ ಬಗ್ಗೆ ನಾವು ಗಮನಿಸಬೇಕು. ಒಬ್ಬರ ಮೇಲೆ ವ್ಯಭಿಚಾರಾರೋಪವನ್ನು ಮಾಡುವವರಿಗಿರುವ ಶಿಕ್ಷೆಯ ಕುರಿತು ಖುರ್‌ಆನ್ ಹೇಳುವುದನ್ನು ನೋಡಿರಿ:

وَالَّذِينَ يَرْمُونَ الْمُحْصَنَاتِ ثُمَّ لَمْ يَأْتُوا بِأَرْبَعَةِ شُهَدَاءَ فَاجْلِدُوهُمْ ثَمَانِينَ جَلْدَةً وَلَا تَقْبَلُوا لَهُمْ شَهَادَةً أَبَدًا وَأُولَئِكَ هُمُ الْفَاسِقُونَ

“ಕುಲೀನಳಾದ ಸ್ತ್ರೀಯರ ಮೇಲೆ (ವ್ಯಭಿಚಾರ) ಆರೋಪಿಸಿ ಬಳಿಕ ನಾಲ್ಕು ಸಾಕ್ಷಿಗಳನ್ನು ತರದವರಿಗೆ ನೀವು ಎಂಬತ್ತು ಹೊಡೆತವನ್ನು ಹೊಡೆಯಿರಿ. ಅವರ ಸಾಕ್ಷವನ್ನು ನೀವು ಎಂದಿಗೂ ಸ್ವೀಕರಿಬೇಡಿರಿ. ಅವರೇ ಫಾಸಿಕ್‌ಗಳು”(ನೂರ್:4)

ವ್ಯಭಿಚಾರಾರೋಪವನ್ನು ಮಾಡಿದ ಬಳಿಕ ಅದಕ್ಕೆ ನಾಲ್ಕು ಸಾಕ್ಷಿಗಳನ್ನು ತರದಿದ್ದಲ್ಲಿ ಅವರು ಅಲ್ಲಾಹನ ಬಳಿ ಸುಳ್ಳುಗಾರರೆಂದು ಖುರ್‌ಆನ್ ಸ್ಪಷ್ಟಪಡಿಸುತ್ತದೆ.

لَوْلَا جَاءُوا عَلَيْهِ بِأَرْبَعَةِ شُهَدَاءَ فَإِذْ لَمْ يَأْتُوا بِالشُّهَدَاءِ فَأُولَئِكَ عِنْدَ اللَّهِ هُمُ الْكَاذِبُونَ

“ಅವರೇಕೆ ಅದಕ್ಕೆ ನಾಲ್ಕು ಸಾಕ್ಷಿಗಳನ್ನು ತರಲಿಲ್ಲ ? ಇನ್ನು ಅವರು ಸಾಕ್ಷಿಗಳನ್ನು ತರದ ಕಾರಣದಿಂದ ಅವರೇ ಅಲ್ಲಾಹನ ಬಳಿ ಸುಳ್ಳುಗಾರರು.”(ನೂರ್:13)

## ತನ್ನ ಸಹೋದರನಿಗೆ ಅಪ್ರಿಯವಾದ ಮಾತುಗಳನ್ನಾಡುವುದು

عَنْ أَبِي هُرَيْرَةَ أَنَّ رَسُولَ اللَّهِ صَلَّى اللَّهُ عَلَيْهِ وَسَلَّمَ قَالَ «أَتَدْرُونَ مَا الْغِيبَةُ قَالُوا اللَّهُ وَرَسُولُهُ أَعْلَمُ قَالَ ذِكْرُكَ أَخَاكَ بِمَا يَكْرَهُ قِيلَ أَفَرَأَيْتَ إِنْ كَانَ فِي أَخِي مَا أَقُولُ قَالَ إِنْ كَانَ فِيهِ مَا تَقُولُ فَقَدْ اغْتَبْتَهُ وَإِنْ لَمْ يَكُنْ فِيهِ فَقَدْ بَهَتَّهُ»

“ಅಬೂ ಹುರೈರಃ(﵁)ರವರಿಂದ ವರದಿ: ಪ್ರವಾದಿ(ﷺ)ರವರು ವಿಚಾರಿಸಿದರು: ಗೀಬತ್

ಏನೆಂಬುವುದು ನಿಮಗೆ ಗೊತ್ತೇ ? ಸ್ವಹಾಬಿಗಳು, ಅಲ್ಲಾಹನಿಗೆ ನಂತರ ನಿಮಗೆ ಹೆಚ್ಚು ತಿಳಿದಿದೆ ಎಂದರು. ನಿಮ್ಮ ಸಹೋದರನಿಗೆ ಅಪ್ರಿಯವಾದ ವಿಷಯವನ್ನು ಹೇಳುವುದಾಗಿದೆ. ಆಗ ವಿಚಾರಿಸಲಾಯಿತು: ತಾನು ಹೇಳುವ ಗುಣ ಸಹೋದರನಲ್ಲಿ ಇದ್ದರೋ ? ನೀನು ಹೇಳುವ ಗುಣ ನಿನ್ನ ಸಹೋದರನಲ್ಲಿದ್ದರೆ ನೀನು ಅವನ ಕುರಿತು ಗೀಬತ್ ಹೇಳಿದೆ. ಆ ಗುಣ ಅವನಲ್ಲಿ ಇಲ್ಲದಿದ್ದರೆ ನೀನು ಅವನ ಕುರಿತು ಸುಳ್ಳು ಹೇಳಿದೆ ಎಂದು ಪ್ರವಾದಿ(ﷺ)ರವರು ಉತ್ತರಿಸಿದರು: (ಮುಸ್ಲಿಂ)

## ಒಂದು ಘಟನೆ:

ಅಲ್ಲಾಹನ ಅನುಗ್ರಹವಾದ ನಾಲಗೆಯ ಮೂಲಕ ನಾವು ಹೇಳುವ ಮಾತುಗಳು ಎಷ್ಟು ಅಪಾಯಕಾರಿ ಎಂಬುದನ್ನು ಈ ಕೆಳಗೆ ಕೊಡಲಾಗುವ ಘಟನೆಯ ಮೂಲಕ ತಿಳಿಯಲು ಸಾಧ್ಯವಾದೀತು.

عَنْ عَائِشَةَ قَالَتْ قُلْتُ لِلنَّبِيِّ صَلَّى اللهُ عَلَيْهِ وَسَلَّمَ حَسْبُكَ مِنْ صَفِيَّةَ كَذَا وَكَذَا قَالَ غَيْرُ مُسَدَّدٍ تَعْنِي قَصِيرَةً فَقَالَ «لَقَدْ قُلْتِ كَلِمَةً لَوْ مُزِجَتْ بِمَاءِ الْبَحْرِ لَمَزَجَتْهُ»

ಆಇಶಾ(ؓ)ರವರು ಹೇಳಿದರು: ಇಂತಹ ಇಂತಹ ಸ್ವಭಾವವಿರುವ ಸ್ವಫಿಯ್ಯರಿಂದ ತಮಗೆ ಸಾಕಾಗಲಿಲ್ಲವೇ ? ಅವಳು ಕುಂಟಿಯಲ್ಲವೇ ? ಆಗ ಪ್ರವಾದಿ(ﷺ)ರವರು ಹೇಳಿದರು: ನೀನು ಹೇಳಿದ ಆ ಪದವನ್ನು ನೀವು ಸಮುದ್ರಕ್ಕೆ ಹಾಕಿದರೆ ಸಮುದ್ರದ ನೀರು ಪರಿಪೂರ್ಣವಾಗಿ ಕೊಳೆಪೂರಿತವಾಗಲು ಸಾಕಾಗುವುದು. (ಅಬೂದಾವೂದ್)

ನಮ್ಮ ದೈನಂದಿನ ಜೀವನದಲ್ಲಿ ಇದಕ್ಕಿಂತಲೂ ಅಪಾಯಕಾರಿಯಾದ ಎಷ್ಟೆಷ್ಟು ಪದಗಳನ್ನು ಪ್ರಯೋಗಿಸಿ ಇತರರನ್ನು ಮೂದಲಿಸುತ್ತಿರುವವರು ಮತ್ತು ಪರಿಹಾಸ್ಯ ಮಾಡುತ್ತಿರುವವರು ಈ ಮೇಲಿನ ಹದೀಸನ್ನು ಗಮನದಲ್ಲಿಟ್ಟು ಕೊಳ್ಳಬೇಕು.

أَنَّ النَّبِيَّ صَلَّى اللهُ عَلَيْهِ وَسَلَّمَ قَالَ «مَنْ أَكَلَ بِرَجُلٍ مُسْلِمٍ أَكْلَةً فَإِنَّ اللهَ يُطْعِمُهُ مِثْلَهَا مِنْ جَهَنَّمَ»

“ಪ್ರವಾದಿ(ﷺ)ರವರು ನುಡಿದರು: ಯಾರಾದರೂ ಓರ್ವನು ಮುಸ್ಲಿಮನ ಮಾಂಸವನ್ನು ತಿನ್ನುವುದಾದರೆ ಅಲ್ಲಾಹನು ಆತನಿಗೆ ನರಕದಿಂದ ಅದೇ ರೀತಿ ತಿನ್ನಿಸುವನು.” (ಅಬೂದಾವೂದ್, ಅಲ್ಬಾನಿ ಸಿಲ್‌ಸಿಲತುಲ್ ಸ್ವಹೀಹ)

## ದ್ವಿಮುಖ:

ಒಟ್ಟಾಗಿ ಜೀವಿಸುತ್ತಿರುವವರನ್ನು ಪರಸ್ಪರ ಬೇರ್ಪಡಿಸಲು ಮತ್ತು ಅವರ ಮಧ್ಯೆ ಫಿತ್ನವನ್ನುಂಟು ಮಾಡಲಿಕ್ಕಾಗಿ ದ್ವಿಮುಖ ತೋರುವ ಕೆಲವರನ್ನು ನಮಗೆ ಕಾಣಬಹುದು. ಅಂತಹ ಜನರ ಕುರಿತು ಪ್ರವಾದಿ(ﷺ)ರವರು ಹೇಳಿದರು:



عَنْ أَبِي هُرَيْرَةَ أَنَّهُ سَمِعَ رَسُولَ اللهِ صَلَّى اللهُ عَلَيْهِ وَسَلَّمَ يَقُولُ «إِنَّ شَرَّ النَّاسِ ذُو الْوَجْهَيْنِ الَّذِي يَأْتِي هَؤُلَاءِ بِوَجْهٍ وَهَؤُلَاءِ بِوَجْهٍ»

“ಅಬೂ ಹುರೈರಃ(ؓ)ರವರಿಂದ ವರದಿ: ಪ್ರವಾದಿ(ಸ)ರವರು ಹೇಳುವುದಾಗಿ ಆಲಿಸಿದೆ: ಜನರಲ್ಲಿ ಅತ್ಯಂತ ಕೆಟ್ಟವರು ದ್ವಿಮುಖವಿರುವವರಾಗಿದ್ದಾರೆ. ಇವರ ಬಳಿ ಒಂದು ಮುಖದಿಂದ ಮತ್ತು ಇತರರ ಬಳಿ ಇನ್ನೊಂದು ಮುಖದೊಂದಿಗೆ ಬೇಟಿಯಾಗುವವರಾಗಿದ್ದಾರೆ ಅವರು. (ಬುಖಾರಿ)

عَنْ عَمَّارٍ قَالَ قَالَ رَسُولُ اللهِ صلى الله عليه وسلم- « مَنْ كَانَ لَهُ وَجْهَانِ فِى الدُّنْيَا كَانَ لَهُ يَوْمَ الْقِيَامَةِ لِسَانَانِ مِنْ نَارٍ ».

ಅಮ್ಮಾರ್(ؓ)ರವರಿಂದ ವರದಿ: ಪ್ರವಾದಿ(ಸ)ರವರು ಹೇಳಿದರು: ಯಾರಿಗಾದರೂ ಇಹಲೋಕದಲ್ಲಿ ದ್ವಿಮುಖವಿದ್ದರೆ ಆತನಿಗೆ ಅಂತ್ಯ ದಿನದಂದು ಬೆಂಕಿಯ ಎರಡು ನಾಲಗೆಯಿರುವುದು. (ಅಬೂದಾವೂದ್ ಅಲ್ಬಾನಿ ಸಿಲ್‌ಸಿಲತುಸ್ವಹೀಹಃ)

## ಖಬರಿನಲ್ಲಿ

ಪರನಿಂದನೆ ಮಾಡುವವರಿಗೆ ಪರಲೋಕ ಜೀವನದ ಒಂದನೇ ಗೃಹವಾದ ಖಬರ್‌ನಲ್ಲೂ ಶಿಕ್ಷೆ ಲಭಿಸುವುದೆಂದು ಕರುಣೆಯ ಪ್ರವಾದಿ(ﷺ)ರವರು ನುಡಿದಿರುವರು:

عَنْ ابْنِ عَبَّاسٍ قَالَ مَرَّ النَّبِيُّ صَلَّى اللهُ عَلَيْهِ وَسَلَّمَ بِقَبْرَيْنِ فَقَالَ إِنَّهُمَا لَيُعَذَّبَانِ وَمَا يُعَذَّبَانِ فِي كَبِيرٍ أَمَّا أَحَدُهُمَا فَكَانَ لَا يَسْتَتِرُ مِنْ الْبَوْلِ وَأَمَّا الْآخَرُ فَكَانَ يَمْشِي بِالنَّمِيمَةِ

“ಇಬ್ನ್ ಅಬ್ಬಾಸ್(ؓ)ರವರಿಂದ ವರದಿ: ಪ್ರವಾದಿ(ﷺ)ರವರು ಎರಡು ಕಬರ್‌ನ ಬಳಿಯಿಂದ ಹಾದು ಹೋಗುತ್ತಿದ್ದಾಗ ಹೇಳಿದರು: ನಿಶ್ಚಯವಾಗಿಯೂ ಇವರು ಶಿಕ್ಷಿಸಲ್ಪಡುತ್ತಿದ್ದಾರೆ. ಅವರು ಶಿಕ್ಷೆ ಅನುಭವಿಸುವುದು ಅವರೆಸಗಿದ ದೊಡ್ಡ ಪಾಪದ ಕಾರಣದಿಂದಲ್ಲ. ಅವರಲ್ಲೊಬ್ಬನು ಮೂತ್ರ ವಿಸರ್ಜನೆ ಮಾಡಿದರೆ ಸರಿಯಾಗಿ ಶುದ್ಧೀಕರಿಸುತ್ತಿರಲಿಲ್ಲ. ಇನ್ನೊಬ್ಬನು ಪರನಿಂದನೆ ಹೇಳಿ ನಡೆಯುತ್ತಿದ್ದನು.(ಬುಖಾರಿ)

ಪ್ರವಾದಿ(ﷺ)ರವರು ಮಿಅ್‌ರಾಜ್‌ಗೆ ಹೋದಾಗ ಅಲ್ಲಿ ಅವರು ವೀಕ್ಷಿಸಿದ ಪರನಿಂದನೆ ಮಾಡುವವರಿಗೆ ಲಭಿಸುವ ಶಿಕ್ಷೆಯನ್ನು ಈ ರೀತಿ ವಿವರಿಸುತ್ತಾರೆ:

عَنْ أَنَسِ بْنِ مَالِكٍ قَالَ قَالَ رَسُولُ اللهِ صَلَّى اللهُ عَلَيْهِ وَسَلَّمَ لَمَّا عُرِجَ بِي مَرَرْتُ بِقَوْمٍ لَهُمْ أَظْفَارٌ مِنْ نُحَاسٍ يَخْمُشُونَ وُجُوهَهُمْ وَصُدُورَهُمْ فَقُلْتُ مَنْ هَؤُلَاءِ يَا جِبْرِيلُ قَالَ هَؤُلَاءِ الَّذِينَ يَأْكُلُونَ لُحُومَ النَّاسِ وَيَقَعُونَ فِي أَعْرَاضِهِمْ (أحمد، سلسلة السحيحة)

“ಅನಸ್ ಇಬ್ನ್ ಮಾಲಿಕ್(ؓ)ರವರಿಂದ ವರದಿ: ಪ್ರವಾದಿ(ﷺ)ರವರು ನುಡಿದರು: ನಾನು ಮಿಅ್‌ರಾಜ್ ಹೋದಾಗ ಅಲ್ಲಿ, ಕಂಚಿನ ಉಗುರುಗಳಿದ್ದು ಆ ಉಗುರುಗಳ ಮೂಲಕ ತಮ್ಮ

ಮುಖವನ್ನೂ, ಎದೆಯನ್ನೂ ಎಳೆಯುತ್ತಿದ್ದ ಒಂದು ವಿಭಾಗ ಜನರ ಮುಂದಿನಿಂದ ಹಾದು ಹೋದಾಗ ನಾನು ಜೀಬ್ರೀಲ್(عليه السلام)ರವರಲ್ಲಿ ಇವರು ಯಾರೆಂದು ವಿಚಾರಿಸಿದೆ. ಅವರು ಹೀಗಂದರು: ಅವರು ಜನರ ಮಾಂಸವನ್ನು ತಿನ್ನುತ್ತಿದ್ದವರು ಮತ್ತು ಜನರ ಅಭಿಮಾನಕ್ಕೆ ಭಂಗ ತರುವವರಾಗಿದ್ದರು. (ಅರ್ಥಾತ್: ಗೀಬತ್ ನಮೀಮತ್ ಹೇಳಿತ್ತಿದ್ದವರು)
(ಅಹ್ಮದ್, ಅಲ್ಬಾನಿಸಿಲ್ ಸಿಲತುಸ್ಸಹೀಹಃ)

## ಸುಳ್ಳು ನರಕಾಗ್ನಿಗೆ

عَنْ عَبْدِ اللهِ قَالَ قَالَ رَسُولُ اللهِ صَلَّى اللهُ عَلَيْهِ وَسَلَّمَ عَلَيْكُمْ بِالصِّدْقِ فَإِنَّ الصِّدْقَ يَهْدِي إِلَى الْبِرِّ وَإِنَّ الْبِرَّ يَهْدِي إِلَى الْجَنَّةِ وَمَا يَزَالُ الرَّجُلُ يَصْدُقُ وَيَتَحَرَّى الصِّدْقَ حَتَّى يُكْتَبَ عِنْدَ اللهِ صِدِّيقًا وَإِيَّاكُمْ وَالْكَذِبَ فَإِنَّ الْكَذِبَ يَهْدِي إِلَى الْفُجُورِ وَإِنَّ الْفُجُورَ يَهْدِي إِلَى النَّارِ وَمَا يَزَالُ الرَّجُلُ يَكْذِبُ وَيَتَحَرَّى الْكَذِبَ حَتَّى يُكْتَبَ عِنْدَ اللهِ كَذَّابًا

"ಅಬ್ದುಲ್ಲಾಹ್(رضي الله عنه)ರವರಿಂದ ವರದಿ: ಪ್ರವಾದಿ(ﷺ)ರವರು ಹೇಳಿದರು: ನೀವು ಸತ್ಯವನ್ನು ಮಾತ್ರ ಹೇಳಿರಿ. ಕಾರಣ ಸತ್ಯವು ಒಳಿತಿನೆಡೆಗೆ ಕೊಂಡೊಯ್ಯುವುದು. ಒಳಿತು ಸ್ವರ್ಗದೆಡೆಗೆ ಕೊಂಡೊಯ್ಯುವುದು. ಓರ್ವನು ಸತ್ಯ ಮಾತ್ರ ಹೇಳಿ, ಸತ್ಯವನ್ನೇ ಹೆಚ್ಚಿಸಿದರೆ ಅವನ ಕುರಿತು ಸತ್ಯಸಂಧನೆಂದು ಅಲ್ಲಾಹನ ಬಳಿ ಲಿಖಿತ ಗೊಳಿಸಿಡಲಾಗುವುದು. ಸುಳ್ಳಿನ ಬಗ್ಗೆ ನೀವು ಜಾಗರೂಕರಾಗಿರಿ. ಸುಳ್ಳು ಪಥಭ್ರಷ್ಟತೆಗೆ ಕೊಂಡೊಯ್ಯುವುದು. ಪಥಭ್ರಷ್ಟತೆಯು ನರಕಾಗ್ನಿಗೆ ಕೊಂಡೊಯ್ಯುವುದು. ಓರ್ವನು ಸುಳ್ಳು ಹೇಳುತ್ತಾ ಸುಳ್ಳನ್ನೇ ಹೆಚ್ಚಿಸಿದರೆ ಅವನ ಬಗ್ಗೆ ಅವನು ದೊಡ್ಡ ಸುಳ್ಳುಗಾರನೆಂದು ಅಲ್ಲಾಹನ ಬಳಿ ಲಿಖಿತ ಗೊಳಿಸಿಡಲಾಗುವುದು."(ಮುಸ್ಲಿಂ)

## ಇಸ್ಲಾಮಿನ ಹೆಸರಿನಲ್ಲಿ ಸುಳ್ಳು

ಸುಳ್ಳುಗಳಲ್ಲಿ ಅತ್ಯಂತ ಅಪಾಯಕಾರಿ ಸುಳ್ಳು ಅಲ್ಲಾಹನ, ಅಲ್ಲಾಹನ ರಸೂಲರ ಮತ್ತು ದೀನ್‌ನ ಹೆಸರಿನಲ್ಲಿ ಹೇಳುವ ಸುಳ್ಳಾಗಿದೆ. ಅಂತಹ ಜನರ ತಾಣ ನರಕಾಗ್ನಿಯಾಗಿದೆಯೆಂದು ಪ್ರಮಾಣಗಳ ಮೂಲಕ ತಿಳಿಯಬಹುದು. ಖುರ್‌ಆನ್ ಹೇಳುತ್ತದೆ:

وَلَا تَقُولُوا لِمَا تَصِفُ أَلْسِنَتُكُمُ الْكَذِبَ هَذَا حَلَالٌ وَهَذَا حَرَامٌ لِتَفْتَرُوا عَلَى اللهِ الْكَذِبَ إِنَّ الَّذِينَ يَفْتَرُونَ عَلَى اللهِ الْكَذِبَ لَا يُفْلِحُونَ

"ನಿಮ್ಮ ನಾಲಗೆಯು ವಿಶ್ಲೇಷಿಸುವವುಗಳ ಆಧಾರದಲ್ಲಿ ಇದು ಹರಾಮ್, ಇದು ಹಲಾಲ್ ಎಂದು ಸುಳ್ಳು ಹೇಳ ಬೇಡಿರಿ. ನೀವು ಅಲ್ಲಾಹನ ಹೆಸರಿನಲ್ಲಿ ಸುಳ್ಳು ಸೃಷ್ಟಿಸುವುದಾಗಿದೆ

(ಅದರ ಫಲ.) ಅಲ್ಲಾಹನ ಹೆಸರಿನಲ್ಲಿ ಸುಳ್ಳು ಸೃಷ್ಟಿಸುವವರು ಯಶಸ್ಸು ಗೊಳ್ಳಲಾರರು. (ಅನ್ನಹ್ಲ್:116)



عَنْ الْمُغِيرَةِ رَضِيَ اللهُ عَنْهُ قَالَ سَمِعْتُ النَّبِيَّ صَلَّى اللهُ عَلَيْهِ وَسَلَّمَ يَقُولُ إِنَّ كَذِبًا عَلَيَّ لَيْسَ كَكَذِبٍ عَلَى أَحَدٍ مَنْ كَذَبَ عَلَيَّ مُتَعَمِّدًا فَلْيَتَبَوَّأْ مَقْعَدَهُ مِنْ النَّارِ

"ಮುಗೀರಃ(رضي الله عنه)ರವರು ಪ್ರವಾದಿ(ﷺ)ರವರು ಹೇಳುವುದನ್ನು ಆಲಿಸಿದರು: ನನ್ನ ಹೆಸರಿನಲ್ಲಿರುವ ಸುಳ್ಳು ನಿಮ್ಮಲ್ಲಿ ಯಾರಾದರೊಬ್ಬರ ಹೆಸರಿನಲ್ಲಿ ಹೇಳುವ ಸುಳ್ಳಿನಂತೆಯಲ್ಲ. ಯಾರಾದರೂ ಉದ್ದೇಶಪೂರ್ವಕವಾಗಿ ನನ್ನ ಹೆಸರಿನಲ್ಲಿ ಸುಳ್ಳು ಹೇಳಿದರೆ ಆತನ ಸೀಟನ್ನು ಆತನು ನರಕಾಗ್ನಿಯಿಂದ ರಿಸರ್ವ್ ಮಾಡಿಡಲಿ."(ಬುಖಾರಿ).

## ತಾಮಾಷೆಗಳು

عن بَهْزُ بن حكيم قال حدثني أبي عن أبيه قَالَ سَمِعْتُ رَسُولَ اللهِ صَلَّى اللهُ عَلَيْهِ وَسَلَّمَ يَقُولُ وَيْلٌ لِلَّذِي يُحَدِّثُ فَيَكْذِبُ لِيُضْحِكَ بِهِ الْقَوْمَ وَيْلٌ لَهُ وَيْلٌ لَهُ

"ಬಹಝ್ ತಮ್ಮ ಪಿತಾರಿಂದ ಮತ್ತು ಅವರು ತಮ್ಮ ಪಿತಾರಿಂದ ವರದಿ ಮಾಡುತ್ತಾರೆ: ಪ್ರವಾದಿ(ಸ)ರವರು ಹೇಳುವುದನ್ನು ನಾನು ಆಲಿಸಿದ್ದೇನೆ: ಜನರನ್ನು ನಗಾಡಿಸಲಿಕ್ಕಾಗಿ ಸುಳ್ಳು ಹೇಳಿ ಮಾತನಾಡುವವನಿಗೆ ನಾಶ, ಅವನಿಗೆ ನಾಶ, ಅವನಿಗೆ ನಾಶ." (ಅಬೂ ದಾವೂದ್)

## ಸರ್ವವೂ ಸ್ಪಷ್ಟವಾದೊಂದು ಗ್ರಂಥದಲ್ಲಿ ಲಿಖಿತ ಗೊಳಿಸಿಡಲಾಗುವುದು.

ಪ್ರತಿಯೋರ್ವ ಮನುಷ್ಯನು ಮಾತನಾಡುವ, ಪ್ರವರ್ತಿಸುವ ಸರ್ವ ವಿಷಯಗಳನ್ನು ಸ್ಪಷ್ಟವಾಗಿ ಲಿಖಿತ ಗೊಳಿಸಿಡಲಾಗುವುದು. ಅದಕ್ಕಾಗಿ ಅಲ್ಲಾಹನು ಮಲಕ್‌ಗಳನ್ನು ಏರ್ಪಡಿಸಿದ್ದಾನೆ. ಅವುಗಳಲ್ಲಿ ಯಾವೊಂದೂ ಬಿಟ್ಟು ಹೋಗದು ಮತ್ತು ಸೇರಿಸಲ್ಪಡಲಾಗುವುದಿಲ್ಲ. ಅಲ್ಲಾಹನು ಹೇಳುತ್ತಾನೆ:

مَا يَلْفِظُ مِنْ قَوْلٍ إِلَّا لَدَيْهِ رَقِيبٌ عَتِيدٌ

"ಅವರು ಯಾವೊಂದು ಮಾತನ್ನು ಉಚ್ಛರಿಸುವಾಗಲೂ ಅವರ ಬಳಿಯಲ್ಲಿ ಸದಾ ಸನ್ನದ್ಧರಾಗಿರುವ ಕಾವಲುಗಾರರಿಂದ ದಾಖಲಿಸ್ಪಡದೆ ಇರುವುದಿಲ್ಲ. (ಕಾಫ್: 18)

## ಪರಲೋಕದಲ್ಲಿ ಅಲ್ಲಾಹನ ಮುಂದೆ ಆ ಗ್ರಂಥಗಳ ಮೂಲಕವಾಗಿದೆ ಜನರು ಹಾಜರು ಗೊಳಿಸಲ್ಪಡುವುದು.

ಆವೊಂದು ಅವಸ್ಥೆಯನ್ನು ಅಲ್ಲಾಹನು ಹೀಗೆ ವಿವರಿಸುತ್ತಾನೆ:

فَأَمَّا مَنْ أُوتِيَ كِتَابَهُ بِيَمِينِهِ فَيَقُولُ هَاؤُمُ اقْرَءُوا كِتَابِيَهْ (19) إِنِّي ظَنَنْتُ أَنِّي مُلَاقٍ حِسَابِيَهْ (20) فَهُوَ فِي عِيشَةٍ رَاضِيَةٍ (21) فِي جَنَّةٍ عَالِيَةٍ (22) قُطُوفُهَا دَانِيَةٌ (23) كُلُوا وَاشْرَبُوا هَنِيئًا بِمَا أَسْلَفْتُمْ فِي الْأَيَّامِ الْخَالِيَةِ (24)

“ಬಲಗೈಯಲ್ಲಿ ಗ್ರಂಥ ನೀಡಲ್ಪಟ್ಟವರು ಹೇಳುವರು: ನನ್ನ ಈ ಗ್ರಂಥವನ್ನು ಓದಿರಿ, ಈ ವಿಚಾರಣೆಯನ್ನು ನಾನು ಎದುರಿಸ್ಲಿದ್ದೇನೆಂದು ನನಗೆ ತಿಳಿದಿತ್ತು. ಅವರು ತೃಪ್ತಿಕರವಾದ

ಜೀವನದಲ್ಲಿರುವರು. ಉನ್ನತವಾದ ಸ್ವರ್ಗೋದ್ಯಾನದಲ್ಲಿರುವರು. ಅವುಗಳಲ್ಲಿರುವ ಹಣ್ಣುಗಳು ಅವರ ಬಳಿಗೆ ಬರುವಂತಿರುವುದು. “ನೀವು ಕಳೆದು ಹೋದ ದಿನಗಳಲ್ಲಿ ಮುಂಗಡವಾಗಿ ಮಾಡಿರುವವುಗಳ ಫಲವಾಗಿ ಸಂತೋಷದಿಂದ ತಿನ್ನಿರಿ ಕುಡಿಯಿರಿ. (ಎಂದು ಅವರಲ್ಲಿ ಹೇಳಲಾಗುವುದು)” (ಅಲ್ ಹಾಕ್ಕ)

ಇನ್ನು ಅಲ್ಲಾಹನನ್ನು ದಿಕ್ಕರಿಸುತ್ತಲೂ ಅಲ್ಲಾಹನ ವಿಧಿ–ವಿಧಾನಗಳನ್ನು ಮತ್ತು ನಿಯಮ–ನಿರ್ದೇಶನಗಳನ್ನು ಪಾಲಸದೆ ಜೀವಿಸಿದವರ ಅವಸ್ಥೆ ಅಲ್ಲಾಹನು ಹೀಗೆ ವಿವರಿಸುತ್ತಾನೆ:

وَأَمَّا مَنْ أُوتِيَ كِتَابَهُ بِشِمَالِهِ فَيَقُولُ يَا لَيْتَنِي لَمْ أُوتَ كِتَابِيَهْ (25) وَلَمْ أَدْرِ مَا حِسَابِيَهْ (26) يَا لَيْتَهَا كَانَتِ الْقَاضِيَةَ (27) مَا أَغْنَى عَنِّي مَالِيَهْ (28) هَلَكَ عَنِّي سُلْطَانِيَهْ (29) خُذُوهُ فَغُلُّوهُ (30) ثُمَّ الْجَحِيمَ صَلُّوهُ (31) ثُمَّ فِي سِلْسِلَةٍ ذَرْعُهَا سَبْعُونَ ذِرَاعًا فَاسْلُكُوه (32)

ಎಡಗೈಯಲ್ಲಿ ಗ್ರಂಥ ನೀಡಲ್ಪಡುವವರು ಹೇಳುವರು: ನನಗೆ ಈ ಗ್ರಂಥ ನೀಡಲ್ಪಡದಿರುತ್ತಿದ್ದರೆ, ನನ್ನ ಈ ವಿಚಾರಣೆಯನ್ನು ನಾನು ತಿಳಿಯದಿರುತ್ತಿದ್ದರೆ ಮತ್ತು ಮರಣದೊಂದಿಗೆ ಸರ್ವವೂ ಕೊನೆ ಗೊಂಡಿರುತ್ತಿದ್ದರೆ ಎಷ್ಟು ಒಳ್ಳೆಯದಿತ್ತು. ನನ್ನ ಸಂಪತ್ತು ನನಗೆ ಪ್ರಯೋಜನಕಾರಿಯಾಗಲಿಲ್ಲ. ನನ್ನ ಅಧಿಕಾರವು ನನ್ನಿಂದ ನಷ್ಟ ಗೊಂಡಿತು.

ಅತನನ್ನು ಹಿಡಿದು ಬಂಧಿಸಿರಿ, ನಂತರ ಜ್ವಲಿಸುವ ನರಕಾಗ್ನಿಗೆ ಪ್ರವೇಶ ಕೊಡಿರಿ. ಆ ಬಳಿಕ ಎಪ್ಪತ್ತು ಮೊಳ ಉದ್ದದ ಸಂಕೋಲೆಯಿಂದ ಬಿಗಿಯಿರಿ. (ಎನ್ನಲಾಗುವುದು). (ಅಲ್ ಹಾಕ್ಕ)

## ಆ ದಿನದಂದು ನಮ್ಮ ಬಾಯಿಗೆ ಸೀಲ್ ಹಾಕಲಾಗುವುದು.

ನಾವು ಪುಷ್ಠಿ ಗೊಳಿಸಿ ಜೋಪಾನವಾಗಿಟ್ಟ ನಮ್ಮ ಕೈಗಳು ಮಾತನಾಡುವುದು ಅದಕ್ಕೆ ಕಾಲುಗಳು ಸಾಕ್ಷಿ ನಿಲ್ಲುವುದು. ಅಲ್ಲಾಹನು ಹೇಳುತ್ತಾನೆ:

الْيَوْمَ نَخْتِمُ عَلَى أَفْوَاهِهِمْ وَتُكَلِّمُنَا أَيْدِيهِمْ وَتَشْهَدُ أَرْجُلُهُمْ بِمَا كَانُوا يَكْسِبُونَ

“ಅವರೆಸಗಿದ ಕೃತ್ಯಗಳ ಕಾರಣದಿಂದ ಅಂತ್ಯ ದಿನದಂದು ಅವರ ಬಾಯಿಗೆ ಸೀಲ್ ಹಾಕಲಾಗುವುದು. ಅವರ ಕೈಗಳು ನಮ್ಮಲ್ಲಿ ಮಾತನಾಡುವುದು. ಅವರ ಕಾಲುಗಳು ಸಾಕ್ಷಿ ನಿಲ್ಲುವುದು.” (ಯಾಸೀನ್:65)

## ಉತ್ತಮ ಮಾತುಗಳು

ಅಲ್ಲಾಹನ ಅನುಗ್ರಹವಾದ ನಾಲಗೆಯನ್ನು ಅವನ ತೃಪ್ತಿಗನುಸಾರ ನಾವು ಉಪಯೋಗಿಬೇಕು. ಅವನ ಧರ್ಮದ ಕಡೆಗೆ ಜನರನ್ನು ಆಹ್ವಾನಿಸುವುದು ಅವನಿಗೆ ಅತ್ಯಂತ ಇಷ್ಟವಿರುವ ಮಾತಾಗಿದೆ. ಪ್ರಮಾಣಬದ್ಧವಾಗಿ ವಿಷಯಗಳನ್ನು ಕಲಿತು ಕಲಿತ ವಿಷಯಗಳನ್ನು ತನ್ನ ಸಾಂರ್ಥ್ಯಕ್ಕನುಸಾರ ಇತರರಿಗೆ ಕಲಿಸಿ ಕೊಡುವುದು ಪ್ರತಿಯೋರ್ವ ಮುಸ್ಲಿಮನ ಮೇಲೆ ಖಡ್ಡಾಯವಾಗಿದೆ. ಅದನ್ನು ನಿರ್ವಹಿಸದೆ ಹೋದರೆ ಅದರ ಕುರಿತು ಪ್ರತಿಯೋರ್ವ ವ್ಯಕ್ತಿಯು



ಅಲ್ಲಾಹನ ಬಳಿ ಪ್ರಶ್ನಿಸ್ಪಡುವನು. ಅಲ್ಲಾಹನಿಗೆ ಅತ್ಯಂತ ತೃಪ್ತಿಕರವಾದ ಅವನ ಕಡೆಗಿರುವ ದಅ್‌ವತನ್ನು ನಿರ್ವಹಿಸಿರಿ. ಅಲ್ಲಾಹನು ಹೇಳುವುದನ್ನು ಗಮನಿಸಿರಿ:

وَمَنْ أَحْسَنُ قَوْلًا مِمَّنْ دَعَا إِلَى اللَّهِ وَعَمِلَ صَالِحًا وَقَالَ إِنَّنِي مِنَ الْمُسْلِمِينَ

“ಅಲ್ಲಾಹನ ಕಡೆಗೆ ಅಹ್ವಾನಿಸುವ ಸತ್ಕರ್ಮವನ್ನೆಸಗುವ ಮತ್ತು ಖಂಡಿತ ನಾನು ಮುಸ್ಲಿಮರಲ್ಲಿ ಒಳಪಟ್ಟವನಾಗಿದ್ದೇನೆಂದು ಹೇಳುವವನಿಗಿಂತ ಉತ್ತಮ ಮಾತು ಹೇಳುವವರು ಇನ್ನಾರಿದ್ದಾರೆ?” (ಫುಸ್ಸಿಲತ್:33) ಅಲ್ಲಾಹನು ಅನುಗ್ರಹಿಸಲಿ.

**************

ಸಯ್ಯಿದ್ ಸಅಫರ್ ಸ್ವಾದಿಕ್ (ಮಲಯಾಳಂ)
ಅನುವಾದ: ಅಬ್ದುಲ್ ಮಜೀದ್ ಎಸ್. ಎಮ್